# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1166 |
| ಸದಸ್ಯರ ಹೆಸರು | : | ಶ್ರೀ ಯು.ಬಿ.ವೆಂಕಟೇಶ್ (ನಾಮ ನಿರ್ದೇಶನ ಹೊಂದಿದವರು) |
| ಉತ್ತರಿಸುವ ದಿನಾಂಕ | : | 22-09-2021. |
| ಉತ್ತರಿಸುವ ಸಚಿವರು | : | ಮಾನ್ಯ ಲೋಕೋಪಯೋಗಿ ಸಚಿವರು |

| ಕ್ರ ಸಂ. | ಪ್ರಶ್ನೆಗಳು | ಉತ್ತರ |
|---|---|---|
| (ಅ) | ಬೆಂಗಳೂರು ಉತ್ತರ ತಾಲ್ಲೂಕು ಯಲಹಂಕ ಹೋಬಳಿಗೆ ಸೇರಿದ ಮಾರಸಂದ್ರ ಗ್ರಾಮದಿಂದ ಹೊನ್ನಾದೇವಿಪುರ ಗೇಟ್ ವರೆಗಿನ ರಸ್ತೆ ಕಾಮಗಾರಿ ಕಳೆದ ಮೂರು ವರ್ಷಗಳಿಂದ ಕುಂಟುತ್ತಾ ಸಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿದೆ. |
| (ಆ) | ಬಂದಿದ್ದಲ್ಲಿ, ಸದರಿ ಕಾಮಗಾರಿ ವಿಳಂಬವಾಗಲು ಕಾರಣವೇನು; ಕಾಮಗಾರಿ ವಿಳಂಬದಿಂದ ಸಾರ್ವಜನಿಕರಿಗೆ ಆಗುತ್ತಿರುವ ತೊಂದರೆ ಬಗ್ಗೆ ಸರ್ಕಾರಕ್ಕೆ ಅರಿವಿದೆಯೇ; | 2016-17ನೇ ಸಾಲಿನ ಕೇಂದ್ರ ರಸ್ತೆ ನಿಧಿ ಯೋಜನೆಯಡಿಯಲ್ಲಿ ಅರದೇಶನಹಳ್ಳಿ-ಸಡಪನಹಳ್ಳಿಗೇಟ್ ರಾಹೆ-7 (ರಾಹೆ-44) ರವರೆಗಿನ ರಸ್ತೆ ಅಭಿವೃದ್ಧಿ ಕಾಮಗಾರಿಯು ದಿನಾಂಕ:02-11-2016) ರಂದು ಕೇಂದ್ರ ಭೂಸಾರಿಗೆ ಮಂತ್ರಾಲಯದಿಂದ ರೂ.40.00 ಕೋಟಿಗಳಿಗೆ ಅನುಮೋದನೆಯಾಗಿರುತ್ತದೆ.<br>ಸದರಿ ರಸ್ತೆ ಕಾಮಗಾರಿಯಲ್ಲಿ ದೇವನಹಳ್ಳಿ ಮತ್ತು ದೊಡ್ಡಬಳ್ಳಾಪುರ ತಾಲ್ಲೂಕುಗಳಲ್ಲಿ ಬರುವ 3 ರಸ್ತೆ ರೀಚ್‌ಗಳಲ್ಲಿ ಒಟ್ಟಾರೆ 32.80 ಕಿ.ಮೀ ಉದ್ದಕ್ಕೆ ಅಭಿವೃದ್ಧಿ ಪಡಿಸಲು ಪ್ರಸ್ತಾಪಿಸಲಾಗಿರುತ್ತದೆ.<br>ಸದರಿ 3 ರಸ್ತೆ ರೀಚ್‌ಗಳಲ್ಲಿ ಬೆಂಗಳೂರು ಉತ್ತರ ತಾಲ್ಲೂಕು, ಯಲಹಂಕ ಹೋಬಳಿಗೆ ಸೇರಿದ ಮಾರಸಂದ್ರ ಗ್ರಾಮದಿಂದ ಹೊನ್ನಾದೇವಿಪುರ ಗೇಟ್‌ವರೆಗಿನ ರಸ್ತೆಯು ಒಂದಾಗಿದ್ದು 15.00 ಕಿ.ಮೀ ಉದ್ದಕ್ಕೆ ಅಭಿವೃದ್ಧಿ ಪಡಿಸಲಾಗುತ್ತಿದೆ.<br>ರಸ್ತೆ ಅಭಿವೃದ್ಧಿ ಕಾಮಗಾರಿಯನ್ನು ದಿನಾಂಕ: 14.11.2017 ರಂದು ಪ್ರಾರಂಭಿಸಲಾಗಿದ್ದು, ಸದರಿ ಕಾಮಗಾರಿಯನ್ನು ನಿರ್ವಹಿಸುತ್ತಿರುವ ಗುತ್ತಿಗೆದಾರರ ಆರ್ಥಿಕ ಮುಗ್ಗಟ್ಟಿನಿಂದ ಹಾಗೂ ಕೋವಿಡ್-19 ಪಿಡುಗುವಿನ ಲಾಕ್ ಡೌನ್‌ನಿಂದಾಗಿ, ಕಾಮಗಾರಿಯು ಸ್ಥಗಿತಗೊಂಡಿತ್ತು. ಪ್ರಸ್ತುತ ಕಾಮಗಾರಿಯನ್ನು ಪುನರಾರಂಭಿಸಲಾಗಿದೆ. |

...2

| | | |
|---|---|---|
| ಇ) | ಈ ಕಾಮಗಾರಿಗಾಗಿ ಕೇಂದ್ರ ಸರ್ಕಾರ ಬಿಡುಗಡೆ ಮಾಡಿರುವ ಅನುದಾನವೆಷ್ಟು; | ಸದರಿ ಕಾಮಗಾರಿಗೆ ಕೇಂದ್ರ ಭೂಸಾರಿಗೆ ಮಂತ್ರಾಲಯದಿಂದ ಕೇಂದ್ರ ರಸ್ತೆ ನಿಧಿ ಯೋಜನೆ ಅಡಿ ರೂ.40.00 ಕೋಟಿಗಳಿಗೆ ಅನುಮೋದನೆಯಾಗಿರುತ್ತದೆ. ಕಾಮಗಾರಿಗೆ ಪ್ರಸ್ತುತ ಹಂತದವರೆಗೆ ರೂ.10.82 ಕೋಟಿ ವೆಚ್ಚ ಮಾಡಲಾಗಿದ್ದು ರೂ.0.36 ಕೋಟಿ ಬಾಕಿ ಬಿಲ್ಲು ಪಾವತಿ ಮಾಡಬೇಕಿರುತ್ತದೆ. |
| ಈ) | ರಸ್ತೆ ಕಾಮಗಾರಿಯನ್ನು ಕೈಗೊಂಡಿರುವ ಗುತ್ತಿಗೆದಾರರ ವಿವರಗಳೇನು; ಯಾವ ಕಾಲಮಿತಿಯೊಳಗೆ ಕಾಮಗಾರಿಯನ್ನು ಪೂರ್ಣಗೊಳಿಸಲಾಗುವುದು? | ಸದರಿ ಕಾಮಗಾರಿಯನ್ನು ಶ್ರೀ ಎಂ.ವೆಂಕಟರಾಮರೆಡ್ಡಿ ಮೊದಲನೇ ದರ್ಜೆ ಗುತ್ತಿಗೆದಾರರು, ಬೆಂಗಳೂರು ರವರಿಗೆ ಗುತ್ತಿಗೆ ಆಧಾರದ ಮೇರೆಗೆ Rs.39,27,60,576.75 ಮೊತ್ತಕ್ಕೆ ವಹಿಸಲಾಗಿರುತ್ತದೆ. ಬಾಕಿ ಉಳಿದಿರುವ ಅಗಲೀಕರಣ ಕಾಮಗಾರಿಯನ್ನು ಆದ್ಯತೆ ಮೇರೆಗೆ ಪೂರ್ಣಗೊಳಿಸಲು ಕ್ರಮ ವಹಿಸಲಾಗುವುದು. |

ಕಡತ ಸಂಖ್ಯೆ: ಲೋಇ 49 ಸಿಆರ್‌ಎಫ್ 2021 (ಇ)

(ಸಿ.ಸಿ.ಪಾಟೀಲ)
ಲೋಕೋಪಯೋಗಿ ಸಚಿವರು